# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1151 |
| ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 07.03.2022 |
| ಉತ್ತರಿಸುವ ಸಚಿವರು | : | ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ರೈತರಿಂದ ರಾಗಿ ಹಾಗೂ ಜೋಳವನ್ನು ಖರೀದಿ ಮಾಡಲಾಗುತ್ತಿದೆಯೇ;</td><td>2021-22 ನೇ ಸಾಲಿನ ಮುಂಗಾರು ಋತುವಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ರೈತರಿಂದ ರಾಗಿ ಮತ್ತು ಜೋಳವನ್ನು ಖರೀದಿ ಮಾಡಲಾಗುತ್ತಿದೆ.</td></tr>
<tr><td>ಆ</td><td>ರೈತರಿಂದ ಖರೀದಿ ಮಾಡಲು ಇರುವ ಮಾನದಂಡಗಳೇನು; ಎಷ್ಟು ಬೆಂಬಲ ಬೆಲೆ ನೀಡಲಾಗುತ್ತಿದೆ;</td><td>ಕೇಂದ್ರ ಸರ್ಕಾರವು 2021-22 ನೇ ಸಾಲಿನ ಮುಂಗಾರು ಋತುವಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ಖರೀದಿಸಲಾಗುವ ಭತ್ತ, ರಾಗಿ ,ಮತ್ತು ಜೋಳಕ್ಕೆ ಈ ಕೆಳಕಂಡಂತೆ ದರ ನಿಗಧಿಪಡಿಸಿದೆ.
<table>
<tr><th colspan="2">ಬೆಳೆ</th><th>ದರಪ್ರತಿಕ್ವಿಂ</th></tr>
<tr><td>ಭತ್ತ</td><td>Common</td><td>1940</td></tr>
<tr><td></td><td>Grade A</td><td>1960</td></tr>
<tr><td>ಜೋಳ</td><td>Hybrid</td><td>2738</td></tr>
<tr><td></td><td>Maldandi</td><td>2758</td></tr>
<tr><td>ರಾಗಿ</td><td></td><td>3377</td></tr>
</table>
ಕೇಂದ್ರ ಸರ್ಕಾರವು ಅನುಮತಿಸಿರುವಂತೆ ರಾಜ್ಯದ ರೈತರಿಂದ 2.10 ಲಕ್ಷ ಮೆಟ್ರಿಕ್ ಟನ್ ರಾಗಿಯನ್ನು ರಾಜ್ಯದ ಸಣ್ಣ ಮತ್ತು ಅತೀ ಸಣ್ಣ ರೈತರಿಂದ ಪ್ರತಿ ಎಕರೆಗೆ 10 ಕ್ವಿಂಟಾಲ್‌ನಂತೆ ಗರಿಷ್ಠ 20 ಕ್ವಿಂಟಾಲ್ ಹಾಗೂ 1.10 ಲಕ್ಷ ಮೆಟ್ರಿಕ್ ಟನ್ ಜೋಳವನ್ನು ರಾಜ್ಯದ ಎಲ್ಲಾ ರೈತರಿಂದ ಪ್ರತಿ ಎಕರೆಗೆ 10 ಕ್ವಿಂಟಾಲ್‌ನಂತೆ ರೈತರು ಹೊಂದಿರುವ ಜಮೀನಿಗೆ ಅನುಗುಣವಾಗಿ ಖರೀದಿಸಲಾಗುತ್ತಿದೆ.</td></tr>
</table>

| | | |
|---|---|---|
| ಇ | ಅತಿ ಹೆಚ್ಚು ರಾಗಿ ಜೋಳ ಬೆಳೆದಿರುವ ರೈತರಿಂದ ಖರೀದಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಕೇಂದ್ರ ಸರ್ಕಾರವು ಅನುಮತಿಸಿರುವಂತೆ 2021-22 ನೇ ಸಾಲಿನ ಮುಂಗಾರು ಋತುವಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ 2.10 ಲಕ್ಷ ಮೆಟ್ರಿಕ್ ಟನ್ ರಾಗಿಯನ್ನು ಖರೀದಿಸಲಾಗುತ್ತಿದ್ದು, ಸದರಿ ಪ್ರಮಾಣದ ಮಾರಾಟ ಮಾಡಲು ಒಟ್ಟು 136322 ರೈತರು ನೋಂದಣಿ ಮಾಡಿಕೊಂಡಿರುತ್ತಾರೆ. ರಾಜ್ಯದಲ್ಲಿ ಹೆಚ್ಚಾಗಿ ರಾಗಿಯನ್ನು ಬೆಳೆದಿರುವ ಹಿನ್ನೆಲೆಯಲ್ಲಿ ರಾಜ್ಯದ ರೈತರಿಂದ ಕೇಂದ್ರ ಸರ್ಕಾರವು ಭಾರತ ಆಹಾರ ನಿಗಮದ ಮುಖಾಂತರ 3.00 ಲಕ್ಷ ಮೆಟ್ರಿಕ್ ಟನ್ ರಾಗಿಯನ್ನು ಖರೀದಿಸುವಂತೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ.<br>1.10 ಲಕ್ಷ ಮೆಟ್ರಿಕ್ ಟನ್ ಜೋಳವನ್ನು ರಾಜ್ಯದ ಎಲ್ಲಾ ರೈತರಿಂದ ಪ್ರತಿ ಎಕರೆಗೆ 10 ಕ್ವಿಂಟಾಲ್‌ನಂತೆ ರೈತರು ಹೊಂದಿರುವ ಜಮೀನಿಗೆ ಅನುಗುಣವಾಗಿ ಖರೀದಿಸಲಾಗುತ್ತಿದೆ. |

ಆನಾಸ 47 ಆರ್‌ಪಿಆರ್ 2022 (ಇ-ಆಫೀಸ್)

(ಉಮೇಶ ವಿ. ಕತ್ತಿ)
ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.